# ಬರಾಅತ್ ರಾತ್ರಿ

-----------------------------------

✍ಮುನೀರ್ ಸಖಾಫಿ ಸಾಲೆತ್ತೂರು
ಸಂಗ್ರಹ: ನಿಸಾರ್ ಸಖಾಫಿ,ಉಳ್ಳಾಲ

ಶಅಬಾನ್ ಹದಿನೈದರ ರಾತ್ರಿ ತುಂಬಾ ಪುಣ್ಯದಾಯಕವಾಗಿದೆ. ಖುರ್ಆನ್ ಮತ್ತು ಹದೀಸ್ ಗಳಿಂದ ಇದು ವ್ಯಕ್ತವಾಗಿದೆ. ಪ್ರಮುಖ ಖುರ್ಆನ್ ವ್ಯಾಖ್ಯಾನಗಾರರು ಸೂರತ್ತುದ್ದುಖಾನ್ ನ ಮೂರನೇ ಸೂಕ್ತವನ್ನು ವಿವರಿಸುತ್ತಾ ಬರೆಯುವುದನ್ನು ನೋಡಿರಿ,

قال عكرمة وجماعة: هي ليلة النصف من شعبان تسمى ليلة البراءة

"ಇಕ್ರಿಮ (ರ) ಮತ್ತು ಒಂದು ವಿಭಾಗ ವಿದ್ವಾಂಸರು ಹೇಳುತ್ತಾರೆ;ಈ ಆಯತ್ ನಲ್ಲಿ ಹೇಳಿರುವ ಬರ್ಕತ್ತಿನ ರಾತ್ರಿ ಶಅಬಾನ್ ಹದಿನೈದರ ರಾತ್ರಿಯಾಗಿದೆ.ಇದಕ್ಕೆ ಬರಾಅತ್ ಎಂಬ ಹೆಸರೂ ಇದೆ.

----------------------------------------

ಇಮಾಮ್ ತ್ವಬ್ರೀ (ರ) ಹೇಳುತ್ತಾರೆ;

حدثنا الفضل بن الصباح والحسن بن عرفة قالا : حدثنا الحسن بن اسماعيل البجلي عن محمد بن

سوقت عن عكرمة في قول الله تبارك وتعالى : {فِيهَا يُفْرَقُ كُلُّ أَمْرٍ حَكِيمٍ} قال : "في ليلة النصف من شعبان

(جامع البيان 154/20)

ಆಯತ್ ನಲ್ಲಿ ಹೇಳಿದ ಎಲ್ಲಾ ಕಾರ್ಯಗಳನ್ನು ಆ ರಾತ್ರಿಯಲ್ಲಿ ವಿತರಿಸಲಾಗುವುದು"ಎಂದು ಹೇಳಿರುವುದು ಶಅಬಾನ್ 15 ರ ರಾತ್ರಿಯ ಕುರಿತಾಗಿದೆ ಎಂದು ಇಕ್ರಿಮ (ರ) ಅಭಿಪ್ರಾಯಪಟ್ಟಿದ್ದಾರೆ. (ಜಾಮಿಉಲ್ ಬಯಾನ್ 25/109)

---

ಇಸ್ಮಾಯಿಲ್ ಹಿಖ್ಖಿ (ರ) ಹೇಳುತ್ತಾರೆ,

وقال بعض المفسرين المراد من الليلة المباركة ليلة النصف من شعبان

(روح البيان 204/7)

"ಬರಕತ್ ಇರುವ ರಾತ್ರಿ ಎಂಬುವುದರ ಉದ್ದೇಶ ಶಅಬಾನ್ 15 ರ ರಾತ್ರಿಯಾಗಿದೆ.

---

## ಹದೀಸ್‌ನಲ್ಲಿ

ومنها حديث معاذ بن جبل -رضي الله عنه- عن النبي -صلى الله عليه وسلم- قال : " يطلع الله إلى جميع خلقه ليلة النصف من شعبان فيغفر لجميع خلقه إلا لمشرك أو مشاحن "

رواه الطبراني في الأوسط

وابن حبان في صحيحه والبيهقي ،

ورواه ابن ماجه

(الترغيب والترهيب 36/2)

ಮುಆದ್ (ರ) ವರದಿ ;ಪ್ರವಾದಿ ಸಲ್ಲಲ್ಲಾಹು ಅಲೈಹಿವಸಲ್ಲಮರು ಹೇಳಿದರು,

ಶ ಅಬಾನ್ ಹದಿನೈದರ ರಾತ್ರಿ ಮುಶ್ರಿಕ್ ಮತ್ತು ವೈರಾಗ್ಯತೋರುವವನಿಗೆ ಹೊರತು ಪಡಿಸಿ ಎಲ್ಲರಿಗೂ ಅಲ್ಲಾಹನು ಕ್ಷಮಿಸುವನು.

(ವರದಿ :

ತ್ವಬ್ ರಾನಿ, ಇಬ್ನ್ ಹಿಬ್ಬಾನ್,

ಬೈಹಖೀ,ಇಬ್ನ್ ಮಾಜ,

ಅತ್ತರ್ ಗೀಬ್ ವತ್ತರ್ ಹೀಬು2/35).

---------------------------------------

ಆಯಿಶ(ರ) ವರದಿ;

عن عائشة رض ان رسول الله صلي الله غليه وسلم قال : "

أتاني جبريل عليه السلام فقال هذه ليلة النصف من

شعبان , ولله فيها عتقاء من نار بعدد شعور غنم بني كلب لا

ينظر الله فيها إلى مشرك ولا إلى مشاحن ولا إلى قاطع رحم ولا

إلى مسبل ولا إلى عاق لوالديه ولا إلى مدمن خمر (البيهقي )

ಪ್ರವಾದಿ ಸಲ್ಲಲ್ಲಾಹು ಅಲೈಹಿವಸಲ್ಲಮರು ಹೇಳಿದರು ;ನನ್ನ ಬಳಿ ಜಿಬ್ರಿಲ್ (ಅ)ಬಂದು ಈ ರಾತ್ರಿ ಶಅಬಾನ್ 15 ರ ರಾತ್ರಿಯಾಗಿದೆ.ಈ ದಿನ ಅಲ್ಲಾಹನು ಕಲಬ್ ಗೋತ್ರದವರ ಆಡುಗಳ ರೋಮದಷ್ಟು ಸಂಖ್ಯೆಯಲ್ಲಿ ಜನರನ್ನು ನರಕದಿಂದ ಮೋಚಿಸುವನು.

(ವರದಿ : ಬೈಹಖೀ ,
ಅತ್ತರ್ ಗೀಬು ವತ್ತರ್ ಹೀಬು2/35).

----------------------------------------

ಇಮಾಮ್ ರಂಲಿ (ರ) ರೊಂದಿಗೆ ಈ ರೀತಿ ಕೇಳಲ್ಪಡಲಾಯಿತು.

وسئل عن صوم منتصف شعبان كما رواه ابن ماجه عن النبي
صلى الله عليه وسلم أنه قال: "إذا كانت ليلة النصف من
شعبان فقوموا ليلها وصوموا نهارها" هل هو مستحب أو لا
وهل الحديث صحيح أو لا وإن كان ضعيفا فمن ضعفه؟

ಶಅಬಾನ್ 15 ರ ಉಪವಾಸ , ಇಮಾಮ್ ಇಬ್ನ್ ಮಾಜ ವರದಿ ಮಾಡಿದ ಹದೀಸಿನ ಅಧಾರದಲ್ಲಿ ಉಪವಾಸ ಸುನ್ನತ್ ಆಗಿದೆಯೇ? ಆ ಹದೀಸ್ ಸ್ವಹೀಹ್ ಆಗಿದೆಯೇ?ಅಥವಾ ಲಹೀಫ್ ಆಗಿದೆಯೇ ?

★ಅದಕ್ಕೆ ಅವರು ಈ ರೀತಿ ಉತ್ತರಿಸಿದರು,★

ಇಬ್ನ್ ಮಾಜ (ರ)ವರದಿ ಮಾಡಿದ ಪ್ರಸ್ತುತ ಹದೀಸ್ ಮೇಲೆ ಹೇಳಿದ ಉಪವಾಸ ಆಚರಿಸುವುದಕ್ಕೆ ಅಧಾರವಾಗಿದೆ.
(ಫತಾವಾ ರಂಲೀ 2/79)

-----------------------------------------------------------------
---------------

ಇಮಾಮ್ ಇಬ್ನ್ ಹಜರ್(ರ) ಹೇಳುತ್ತಾರೆ;

والحاصل أن لهذه الليلة فضلا ، وأنه يقع فيها مغفرة مخصوصة واستجابة مخصوصة ، ومن ثم قال الشافعي رضي الله عنه : إن الدعاء يستجاب فيها

ಒಟ್ಟಿನಲ್ಲಿ ಶ ಅಬಾನ್ 15 ರಾತ್ರಿಗೆ ಮಹತ್ವವಿದೆ ಹಾಗೂ ಪ್ರತ್ಯೇಕವಾದ ಮಗ್ಫಿರತ್ ಮತ್ತು ದುಆ ಗೆ ಉತ್ತರ ನೀಡಲ್ಪಡುವ ದಿವಸವಾಗಿದೆ.ಆದುದರಿಂದಲೇ ಆ ರಾತ್ರಿಯಲ್ಲಿ ದುಆಗೆ ಉತ್ತರ ನೀಡಲ್ಪಡುವುದು ಎಂದು ಇಮಾಮ್ ಶಾಫಿಈ (ರ) ಹೇಳಿದ್ದಾರೆ.

(ಫತಾವ ಕುಬ್ರಾ 2/80).

-----------------------------------------------------------------
---------------

ವಹ್ಹಾಬಿಗಳ ಅಂಗೀಕೃತ ನಾಯಕ ಇಬ್ನ್ ತೀಮಿಯ್ಯ ಹೇಳುವುದು ನೋಡಿ,

" وأما ليلة النصف من شعبان فقد رُوي في فضلها أحاديث وآثار ، ونُقل عن طائفة من السلف أنهم كانوا يصلون فيها ،

فصلاة الرجل فيها وحده قد تقدمه فيه سلف وله فيه
حجة فلا ينكر مثل هذا

ಶಅಬಾನ್ 15 ರ ರಾತ್ರಿಯ ಮಹತ್ವವನ್ನು ಪ್ರತಿಪಾದಿಸುವ ಹಲವಾರು ಹದೀಸ್ ಗಳು ವರದಿ ಮಾಡಲ್ಪಡಲಾಗಿದೆ.ಶಅಬಾನ್ 15 ರ ರಾತ್ರಿ ಸಲಫ್‌ಗಳ ಒಂದು ವಿಭಾಗ ನಮಾಝ್ ನಿರ್ವಹಿಸಿದಾಗಿ ಉಲ್ಲೇಖಿಸಲ್ಪಟ್ಟಿದೆ.ಹೀಗಿರುವಾಗ ,ಒಬ್ಬನು ಈ ರಾತ್ರಿ ನಮಾಝ್ ನಿರ್ವಹಿಸುವುದಾದರೆ ಅದರಲ್ಲಿ ಸಲಫ್ ಗಳು ಮಾದರಿಯಾಗಿದ್ದಾರೆ.
ಸಲಫ್ ಗಳಿಗೆ ಅದಕ್ಕೆ ಆಧಾರವಿದೆ.ಇದನ್ನು ನಿಷೇಧಿಸಲಾಗದು.
(ಫತಾವಾ ಇಬ್ನ್ ತೀಮಿಯ್ಯ 23/80).

----------------------------------------------------------------

★ಒಟ್ಟಿನಲ್ಲಿ ಬರಾಅತ್ ರಾತ್ರಿ ಎಂಬುವುದು ಅತೀ ಮಹತ್ವವಿರುವ ರಾತ್ರಿಯೆಂದು ಹದೀಸ್ ಮತ್ತು ಇಮಾಮರುಗಳ ಹೇಳಿಕೆಯಿಂದ ಬಹಳ ಸ್ಪಷ್ಟವಾಯಿತು.ವಹ್ಹಾಬಿಗಳ ನಾಯಕ ಇಬ್ನ್ ತೀಮಿಯ್ಯ ಕೂಡಾ ಇದನ್ನು ಅಂಗೀಕರಿಸಿದ್ದಾರೆ ಎನ್ನುವಾಗ ವಹ್ಹಾಬಿಗಳಿಗೂ ಇದರಲ್ಲಿ ಸಂಶಯಕ್ಕೆ ಆಸ್ಪದವಿಲ್ಲ.★

==============================

# ವಿಮೋಚನೆಯ ಬರಾಅತ್ ರಾತ್ರಿ

✍ ಇಕ್ಬಾಲ್ ಜಿ.ಕೆ.ಗುಲ್ವಾಡಿ

ಶಅಬಾನ್ ತಿಂಗಳ ಬಹಳ ಪುಣ್ಯಕರವಾದ ಮತ್ತು ಗೌರವಿಸಬೇಕಾದ ರಾತ್ರಿಯಾಗಿದೆ ಶಅಬಾನ್ ಹದಿನೈದರ ರಾತ್ರಿ. ಬರಾಅತ್ ಎಂಬ ಹೆಸರಿನಲ್ಲಾಗಿದೆ ಈ ರಾತ್ರಿಯನ್ನು ಪರಿಚಯಿಸಲ್ಪಡುವುದು. ಅಲ್ಲಾಹನು ಹೇಳುತ್ತಾನೆ, "ಖಂಡಿತವಾಗಿಯೂ ನಾವು ಅದನ್ನು(ಕುರಾನ್) ಒಂದು ಅನುಗ್ರಹವಾದ ರಾತ್ರಿಯಲ್ಲಿ ಇಳಿಸಲ್ಪಟ್ಟಿದ್ದೇವೆ. ಖಂಡಿತವಾಗಿಯೂ ನಾವು ಎಚ್ಚರಿಕೆ ನೀಡವವನಾಗಿದ್ದೇನೆ. ಆ ರಾತ್ರಿಯಲ್ಲಿ ಯುಕ್ತಿಪೂರ್ಣವಾದ ಒಂದೊಂದು ಕಾರ್ಯವನ್ನೂ ಬೇರ್ಪಡಿಸಿ ವಿವರಿಸಿಕೊಡಲಾಗುವುದು"

(ಸೂರಾ: ದು:ಖಾನ್ - 2,3,4)

ಈ ಸೂಕ್ತವನ್ನು ಪ್ರಮುಖ ಕುರಾನ್ ವ್ಯಾಖ್ಯಾನಕಾರರು ಈ ರೀತಿಯಾಗಿ ವ್ಯಾಖ್ಯಾನಿಸುವುದನ್ನು ಕಾಣಬಹುದು;

ಇಮಾಂ ರಾಝೀ(ರ) ಹೇಳುತ್ತಾರೆ,

"ಇಕ್'ರಿಮ(ರ) ಮತ್ತು ಇತರ ಪಂಡಿತರು ಹೇಳಿರುವರು, ಈ ಸೂಕ್ತದಲ್ಲಿ ಹೇಳಲ್ಪಟ್ಟ ಪುಣ್ಯವಿರುವ ರಾತ್ರಿ ಯಾಗಿದೆ. ಅದು ಶಅಬಾನ್ ಹದಿನೈದರ ರಾತ್ರಿ"

(ತಫ್ಸೀರುಲ್ ಖಬೀರ್ 22/239)

ಇಸ್ಮಾಯಿಲುಲ್ ಹಿಖ್ಖಿ (ರ) ಹೇಳುತ್ತಾರೆ;
"ಕುರಾನ್ ವ್ಯಾಖ್ಯಾನಗಾರರಲ್ಲಿ ಕೆಲವರು ಹೇಳುತ್ತಾರೆ.
ಪುಣ್ಯವಿರುವ ರಾತ್ರಿ ಎಂಬ ಉದ್ದೇಶ ಶಅಬಾನ್ ಹದಿನೈದರ
ರಾತ್ರಿಯಾಗಿದೆ"
(ರೂಹುನ್ ಬಯಾನ್ 8/402, ಜಾಮಿಉನ್ ಬಯಾನ್
25/109,
ಮದಾರಿಕ್ 4/126)

ಮಹ್ಮೂದ್ ಆಲುಸೀ ಬರೆಯುತ್ತಾರೆ;
"ಇಕ್ರಿಮ(ರ) ರವರು, ಒಂದು ವಿಭಾಗ ಪಂಡಿತರುಗಳು ಹೇಳಿರುವರು.
ಈ ಸೂಕ್ತದಲ್ಲಿ ಹೇಳಲ್ಪಟ್ಟ ಪಣ್ಯವಾದ ರಾತ್ರಿ ಶಅಬಾನ್ ಹದಿನೈದರ
ರಾತ್ರಿಯಾಗಿದೆ. ಇದಕ್ಕೆ ಬರಾಅತ್ ರಾತ್ರಿಯೆಂದೂ ಹೆಸರಿದೆ."
(ರೂಹುನ್ ಮಆನಿ 25/110 ಇಬ್ನುಲ್ ಜೌಝಿಯ ಸಾದುನ್
ಮಸೀರ್ - ಇಮಾಂ ಸುಯೂತಿ(ರ) ರವರ ಅದುರ್ರುನ್ ಮನ್ಸುರ್
- ಶೌಕಾನಿಯವರ ಫತ್ಹುನ್ ಖದೀರ್ - ಇಮಾಂ ಖುರ್ತುಬಿ(ರ)
ರವರ ಅನ್ ಜಾಮಿಅ ಲಿನ್ ಅಹ್'ಕಾಮಿನ್ ಕುರಾನ್ 17/166)
ಮೊದಲಾದ ಕುರಾನ್ ವ್ಯಾಖ್ಯಾನಗಳಲ್ಲೂ ಈ ಅಭಿಪ್ರಾಯವನ್ನು
ಕಾಣಬಹುದು.

ಮೇಲೆ ವಿವರಿಸಿದ ಸೂಕ್ತದ ವ್ಯಾಖ್ಯಾನಗಾರರು ವ್ಯಾಖ್ಯಾನಿಸಿದ
ವಿಷಯಗಳಾಗಿದೆ ಮೊದಲು ಸೂಚಿಸಿರುವುದು.

ಪ್ರಸ್ತುತ ಸೂಕ್ತದಲ್ಲಿ ಮೇಲೆ ವ್ಯಾಖ್ಯಾನ ನೀಡಿದ ಕೆಲ ಪಂಡಿತರು ಅದು ಲೈಲತುಲ್ ಖದ್ರ್ ನೊಂದಿಗೆ ಒಳಪಡುತ್ತದೆಂದು ವ್ಯಾಖ್ಯಾನಿಸಿದ್ದನ್ನು ಕಾಣಬಹುದು. ಆಗ ಈ ಸೂಕ್ತದ ವ್ಯಾಖ್ಯಾನದ ಪರಿಧಿಯಲ್ಲಿ ಲೈಲತುಲ್ ಖದ್ರ್ ಕೂಡಾ ಒಳಗೊಂಡಿರುತ್ತದೆ. ಎಂದಲ್ಲದೇ ಒಂದು ಇನ್ನೊಂದನ್ನು ನಿರಾಕರಿಸಲೋ ನಿಷೇಧಿಸಲೋ ಮಾಡುವುದಿಲ್ಲ.

ಒಂದು ಸೂಕ್ತಕ್ಕೆ ಒಂದಕ್ಕಿಂತ ಅಧಿಕ ವ್ಯಾಖ್ಯಾನಗಳುಂಟಾದರೆ ವೈರುಧ್ಯವಾಗಿ ಕಡೆಗಣಿಸದೇ, ವೈವಿಧ್ಯಮಯವಾಗಿ ಪರಿಗಣಿಸಿ ಪ್ರಸ್ತುತ ಅಭಿಪ್ರಾಯಗಳನ್ನು ಒಳಪಡಿಸಿ ಅಂಗೀಕರಿಸಬೇಕಾಗಿರುವುದು. ಈ ನಿಯಮ ವ್ಯಾಖ್ಯಾನ ಶಾಸ್ತ್ರವನ್ನು ವಿವರಿಸುವ ಪಂಡಿತರು ಎಚ್ಚರಿಸಿರುವುದನ್ನು ಕಾಣಬಹುದು.
(ತಫ್ಸೀರುಲ್ ಕಬೀರ್)

ತಪ್ಪುಗಳನ್ನು ಪಶ್ಚಾತ್ತಪಿಸಲು ಇಂದು ಬೇಡುವವನಿಲ್ಲವೋ,
ನಾನು ಸ್ವೀಕರಿಸುವೆನು.
ಆಹಾರ ಬೇಡುವವನಿಲ್ಲವೋ, ನಾನು ಆಹಾರವನ್ನು ನೀಡುವೆನು.
ಪ್ರಯಾಸವನ್ನು ಅನುಭವಿಸುವವನಿಲ್ಲವೋ,
ನಾನು ಸುಖವನ್ನು ನೀಡುವೆನು.
(ಬರಾಅತ್ ರಾತ್ರಿಯಂದು) ಪ್ರಭಾತದ ವರೆಗೆ ಅಲ್ಲಾಹು ಈ ರೀತಿ ಹೇಳುತ್ತಿರುವನು (ಇಬ್ನು ಮಾಜ)

ಪ್ರಪಂಚದಲ್ಲಿ ಏನು ನಡೆಯಬೇಕು, ನಡೆಯಬಾರದು ಎನ್ನುವುದೆಲ್ಲವೂ ಅಲ್ಲಾಹನ ಅರಿವಿಗೂ ಉದ್ದೇಶಕ್ಕೂ

ವಿಧೇಯವಾಗಿದೆ. ಆ ಕಾರ್ಯಗಳೆಲ್ಲಾ ಮೊದಲೇ ತೀರ್ಮಾನಿಸಿಯಾಗಿದೆ. ಆದರೆ ಒಬ್ಬೊಬ್ಬ ಮನುಷ್ಯ ಮತ್ತಿತರ ಜೀವಿಗಳೊಂದಿಗೆ ಸಂಬಂಧಿಸಿ ಅಲ್ಲಾಹನ ತೀರ್ಮಾನಗಳ ಕಾರ್ಯಗಳನ್ನು ವರ್ಷದಲ್ಲೊಂದು ಬಾರಿ ಮಲಕ್ ಗಳಿಗೆ ಹಸ್ತಾಂತರಿಸುವುದು ಪವಿತ್ರ ರಮಳಾನಿನ ಲೈಲತುಲ್ ಖದ್ರ್ ನಲ್ಲಾಗಿದೆ. ಇದನ್ನು ಕ್ರಮಪ್ರಕಾರವಾಗಿಸುವ ಕಾರ್ಯಗಳ ಆರಂಭವಾಗಿದೆ ಬರಾಅತ್ ರಾತ್ರಿ. ಆರಂಭ ದಿನವಾಗಿ ಬರಾಅತ್ ರಾತ್ರಿಯಾಗಿಯೂ, ಕೊನೆಯ ದಿನ ಲೈಲತುಲ್ ಖದ್ರ್ ರಾತ್ರಿಗಳೂ ಬಹಳ ಪುಣ್ಯಗಳ ರಾತ್ರಿಗಳಾಗಿದೆ.

ಬರಾಅತ್ ಎನ್ನುವ ಪದದ ಅರ್ಥ ಮೋಚನೆ ಎಂದಾಗಿದೆ. ಈ ರಾತ್ರಿ ಪಾಪಿಗಳಿಗೆ ಮೋಕ್ಷಕ್ಕಾಗಿ ನಿಮಿತ್ತಗೊಳಿಸಿದ್ದಾಗಿದೆ ಎಂದು, ಹೀಗಾಗಿ ಈ ಹೆಸರು ಬರಲು ಕಾರಣವೆಂದು ಪಂಡಿತರಲ್ಲಿ ಕೆಲವರು ಹೇಳಿರುವರು.

ಬರಾಅತ್ ರಾತ್ರಿಯಲ್ಲಿ ಪ್ರತ್ಯೇಕವಾದ ಪಾಪ ವಿಮೋಚನೆ ಹದೀಸ್ ಗಳಲ್ಲಿ ಕಾಣಬಹುದು.

ಮಹತ್ವ ಹೊಂದಿದ ರಾತ್ರಿ ಬರಾಅತ್ ರಾತ್ರಿಯ ಮಹತ್ವವು ಸರ್ವಾಂಗೀಕೃತವಾಗಿದೆ. ಮುಸ್ಲಿಂ ಲೋಕ ಎಂದೆಂದೂ ಈ ರಾತ್ರಿಯ ಮಹತ್ವವನ್ನು ಒಳಗೊಂಡಾಗಿದೆ ಪ್ರವರ್ತರಾಗಿರುವುದು.

# ಬರಾಅತ್ ವ್ರತ

ನಬಿ ಹೇಳಿದರು "ಶಅಬಾನ್ ಅರ್ಧದ ರಾತ್ರಿಯಲ್ಲಿ ನೀವು ನಮಾಝ್ ನಿರ್ವಹಿಸಿ ಅದರ ಪ್ರಭಾತದಲ್ಲಿ ನೀವು ವ್ರತಾನುಷ್ಟಿಸಿರಿ" (ಇಬ್ನು ಮಾಜ. ಮಿಶ್ಕಾತ್ 1/155) ಈ ಹದೀಸಿನ ಕುರಿತು ಇಮಾಂ ರಮ್'ಲಿ(ರ)ರವರೊಡನೆ ಕೇಳಿದಾಗ ಅವರು ಹೇಳಿದರು "ಈ ಹದೀಸ್ ನಿಂದ ಲಕ್ಷ್ಯ ತಲುಪಬಹುದಾಗಿದೆ"

(ಫತಾವಾ ರಮ್'ಲಿ 2/79)

ಇಮಾಂ ರಮ್'ಲಿ(ರ) ಹೇಳುತ್ತಾರೆ "ಶಅಬಾನ್ ಹದಿನೈದರ ವ್ರತ ಸುನ್ನತ್ತಾಗಿದೆ"(ಫತಾವಾ ರಮ್'ಲಿ 2/79)

## ಪ್ರಾರ್ಥನೆ

ಅದೇ ದಿನದಲ್ಲಿರುವ ಪ್ರಾರ್ಥನೆ ಸ್ವಹಾಬಿಗಳಿಂದ ಅಂದಿನ ಪಂಡಿತರುಗಳಿಂದ ಉಲ್ಲೇಖಿಸಲಾಗಿದೆ.

ಮುಲ್ಲಾ ಅಲಿಯ್ಯುಲ್'ಖಾರೀ(ರ) ಹೇಳುತ್ತಾರೆ, "ಉಮರ್ ಬ್ನುಲ್ ಖತ್ತಾಬ್(ರ), ಇಬ್ನು ಮಸ್'ವೂದ್(ರ) ಮೊದಲಾದವರಿಂದ ಉಲ್ಲೇಖಿಸಲಾಗಿದೆ. ಅವರು ಈ ರೀತಿಯಾಗಿ ಪ್ರಾರ್ಥಿಸುತ್ತಿದ್ದರು.

(ಮಿರ್'ಖಾತ್ 2/178)

اَللّٰهُمَّ اِنْ كُنْتَ كَتَبْتَنَا اَشْقِيَاءَ فَامْحُهُ وَاكْتُبْنَا سُعَدَاءَ وَاِنْ كُنْتَ
كَتَبْتَنَا سُعَدَاءَ فَاثْبِتْنَا فَاِنَّك تَمْحُو مَاتَشَاءُ وَعِنْدَكَ اُمُّ الِكتَاب

(ಅಲ್ಲಾಹನೇ ನೀನು ನಮ್ಮನ್ನು ಪರಾಜಿತರಲ್ಲಿ ಬರೆದಿಟ್ಟಿರುವುದಾದರೆ ನೀನು ಅದನ್ನು ಅಳಿಸಿಹಾಕಿ ವಿಜೇತರಲ್ಲಿ ಸೇರಿದವರಾಗಿ ನೀನು ನಮ್ಮೆಲ್ಲರನ್ನೂ ಬರೆದಿಡು ನಾದಾ. ನೀನು ನಮ್ಮನ್ನು ವಿಜೇತರಲ್ಲಿ ಬರೆದಿಟ್ಟಿರುವುದಾದರೆ ನೀನು ಅದನ್ನು ಸ್ಥಿರವಾಗಿಸಿಡು ನಾದಾ. ಉದ್ದೇಶಿಸಿದ್ದನ್ನು ಸ್ಥಿರವಾಗಿಸುವವನು, ಅಳಿಸಿಹಾಕುವವನು ನೀನಾಗಿರುವೆನು. ನಿನ್ನೊಂದಿಗಾಗಿದೆ ಉಮ್ಮುಲ್ ಕಿತಾಬ್)

## 🌹 ಬರಾಅತ್ ರಾತ್ರಿಯಲ್ಲಿ ಪಠಿಸಬೇಕಾದ ದ್ಸಿಕ್ರ್ ಗಳು ಮತ್ತು ದುಆ ಗಳು 🌹

اَللّٰهُمَّ اِنَّك حَلِيمٌ ذُو اِنَائَةٍ لَا طَاقَةَ لَنَا فَاعْفُ عَنَا بِحِلْمِك يَا اَللہ بِرَحْمَتِك يَا اَرْحَمَ الرَحِمِين
(ಎಪ್ಪತ್ತು ಬಾರಿ ಹೇಳಬೇಕು)

يَا حَيُّ يَاقَيَومُ بِرَحْمَتِك اَسْتَغِيث
(ನೂರು ಬಾರಿ ಹೇಳಬೇಕು)

ಸೂರಾಃ ಯಾಸೀನ್ ಮೂರು ಬಾರಿ ಪಾರಾಯಣ ಮಾಡಬೇಕು

- ದೀರ್ಘಾಯುಷ್ಯಕ್ಕಾಗಿ
- ಆಹಾರಗಳಲ್ಲಿ ವಿಶಾಲತೆ (ಬರ್ಕತ್)ಲಭಿಸಲು
- ಈಮಾನ್ ನೊಂದಿಗೆ ಮರಣ ಹೊಂದಲು

ಸೂರಾಃ ದುಖಾನ್ ಪಾರಾಯಣ ಮಾಡಬೇಕು

ತಿಳಿಯದವರಿಗೆ ಅರಿವು ಮೂಡಿಸುವುದು ಅತಿ ದೊಡ್ಡ ದಾನವಾಗಿದೆ. ಓದಿರಿ ಮತ್ತು ಎಲ್ಲರಿಗೂ ರವಾನಿಸಿರಿ

ಅಲ್ಲಾಹು ನಮ್ಮೆಲ್ಲರನ್ನೂ ಸ್ವರ್ಗ ದಲ್ಲಿ ಒಂದುಗೂಡಿಸಲಿ, ಆಮೀನ್